149

# ಚಾಣಕ್ಯ ಶತಕ

(ಭಾಗ ೨)

ಕನ್ನಡ ಅರ್ಥ ಸಹಿತ

ಅನುವಾದಕರು:

ಡಾ| ಟಿ. ಪಿ. ಭಟ್,

ಮಂಗಳೂರು.

1957.



ಒಂದಾಣೆ ಮಾಲೆ

# ಒಂದಾಣೆ ಮಾಲೆಯಲ್ಲಿ ತಾ. 3-8-1956ರ ವರೆಗೆ ಪ್ರಕಟವಾದ ಪುಸ್ತಕಗಳು

೧. ‡ಕೆಪ್ಪಟೆರಾಯ (ವಿನೋದ ಕಥೆ) ದಿ| ಎಂ. ಎನ್. ಕಾಮತ್.
೨. ನಾರೀಶ್ವರರು (ದ್ವಿತೀಯ ಮುದ್ರಣ) ಶ್ರೀ| ಕುಡ್ಪಿ ವಾಸುದೇವ ಶೆಣೈ.
೩. ಕಳ್ಳನಿಗೆ ಸಂಭಾವನೆ (ದ್ವಿತೀಯ ಮುದ್ರಣ) ಶ್ರೀ| ಎಲ್. ಎಸ್. ನಾಯಕ.
೪. ‡ಸದ್ರಿ ಸುಬ್ಬ (ಏಕಾಂಕ ಪ್ರಹಸನ) ದಿ| ಎಂ. ಎನ್. ಕಾಮತ್.
೫. ಅದ್ಭುತ ತ್ಯಾಗ (ದ್ವಿತೀಯ ಮುದ್ರಣ) ವೈದ್ಯಗುರು ಎಂ. ಆರ್. ಭಟ್.
೬. ‡ಚುನಾವಣೆ ಅರ್ಥಾತ್ ಬನಾವಣೆ (ಏಕಾಂಕ ಪ್ರಹಸನ) ಕುಡ್ಪಿ ವಾಸುದೇವ ಶೆಣೈ.
೭. ‡'ಬೀಡಿ ಸೇದಬೇಡಿ' ಮತ್ತು 'ಆ ಮಗು' (ವಿನೋದ ಕಥೆಗಳು) ದಿ| ಎಂ.ಎನ್.
೮. ‡ಇಂಗ್ಲಿಷ್–ಕನ್ನಡ ಅರ್ಥಕೋಶ (ಭಾರತ ಸಂವಿಧಾನದಿಂದ) [ಕಾಮತ್.
೯. ಲಂಚಕ್ಕೆ ಸಂಚಕಾರ (ದ್ವಿತೀಯ ಮುದ್ರಣ) ಡಾ| ಎಸ್. ಪಿ. ಭಟ್.
೧೦. ‡ಟಿಶ್ಯೂ ಔಷಧಿಗಳ ಕೈಪಿಡಿ. ಶ್ರೀ| ಪಿ. ಎಸ್. ವೆಂಕಟಕೃಷ್ಣರಾವ್.
೧೧. ಶ್ರೀಕ್ಷೇತ್ರ ಧರ್ಮಸ್ಥಳ (ಐದನೇ ಮುದ್ರಣ).
೧೨. ಜೀವದ ಮೌಲ್ಯ (ದ್ವಿತೀಯ ಮುದ್ರಣ) ಶ್ರೀ| ಎಲ್. ಎಸ್. ನಾಯಕ.
೧೩. ‡ಸತ್ತವನ ಸೇಡು ಮತ್ತು ಇತರ ಕಥೆಗಳು ಡಾ| ವಿ. ಆರ್. ಭಟ್.
೧೪. ‡"ವೆಂಕಟನ ಸಂಕಟ" (ಏಕಾಂಕ ಪ್ರಹಸನ) ಮತ್ತು ಎರಡು ಕಥೆಗಳು
೧೫. ಬಾಬಿಗೆ ಬಾಸಿಂಗ (ದ್ವಿತೀಯ ಮುದ್ರಣ) ಶ್ರೀ| ಕುಡ್ಪಿ ವಾಸುದೇವ ಶೆಣೈ.
೧೬. ವೇಣೂರಿನ ಗತವೈಭವ (ದ್ವಿ. ಮುದ್ರಣ) ದಿ| ಪಂಡಿತ ಲೋಕನಾಥ ಶಾಸ್ತ್ರಿಗಳು.
೧೭. ಒಗಟುಗಳು (ದ್ವಿತೀಯ ಮುದ್ರಣ) ಶ್ರೀ| ಟಿ. ಚಂದ್ರರಾಜ ಸೆಟ್ಟಿ.
೧೮. ಜಗಳಗಂಟಿ ಮತ್ತು ಇತರ ಕಥೆಗಳು (ದ್ವಿ.ಮು.) ವೈದ್ಯಗುರು ಎಂ. ಆರ್. ಭಟ್.
೧೯. ರಥೋತ್ಸವ.
೨೦. ‡ಕರಿನಾಯಿ ಮತ್ತು ಮುಪ್ಪು ದಿ| ಎಂ. ಎನ್. ಕಾಮತ್.
೨೧. ಭಾರತದ ಮಹಾನಗರಗಳು (ದ್ವಿ. ಮುದ್ರಣ) ಶ್ರೀ| ಟಿ. ಚಂದ್ರರಾಜ ಸೆಟ್ಟಿ.
೨೨. ತಿರುಕ್ಕುರಲ್ (ದ್ವಿತೀಯ ಮುದ್ರಣ) ಶ್ರೀ| ಡಿ. ಪುಟ್ಟಸ್ವಾಮಿ, ಎಡ್ವೋಕೇಟ್.
೨೩. ಸೂರ್ಯನ ಸಂಸಾರ ಮತ್ತು ಇತರ ಕಥೆಗಳು (ದ್ವಿ.ಮು.) ಶ್ರೀ| ಬಿ. ಶಂಕರ ಭಟ್.
೨೪. ಭಾರತದ ಮಹಾನಗರಗಳು (ದ್ವಿತೀಯ ಮುದ್ರಣ) ಶ್ರೀ| ಟಿ. ಚಂದ್ರರಾಜ ಸೆಟ್ಟಿ.
೨೫. ಧೈರ್ಯ ಮತ್ತು ಇತರ ಸತ್ಯ ಕಥಾನಕಗಳು ಶ್ರೀ| ಎಲ್. ಎಸ್. ನಾಯಕ.
೨೬. ಮಹಾವತಾರ (ದ್ವಿತೀಯ ಮುದ್ರಣ) ಶ್ರೀ| ಜಿ.ಆರ್.ಪಾಂಡೇಶ್ವರ.
೨೭. ಹಾಸವಿಲಾಸ [ದ್ವಿ.ಮು.] ಶ್ರೀ| ಕುಡ್ಪಿ ವಾಸುದೇವ ಶೆಣೈ.
೨೮. ಸತ್ಯವಂತ ಬಾಬಿ [ದ್ವಿತೀಯ ಮುದ್ರಣ] ಶ್ರೀ| ಕುಡ್ಪಿ ವಾಸುದೇವ ಶೆಣೈ.
೨೯. ಜಾಣ್ಮೆಯ ಒಗಟುಗಳು ಡಾ| ಎಸ್. ಪಿ. ಭಟ್.
೩೦. ಜಾತಕ ಕಥೆಗಳು [ದ್ವಿ.ಮು.] ಶ್ರೀ| ಎಂ. ಸುಬ್ರಾಯನ್.
೩೧. ಕಾರ್ಕಳದ ಚರಿತ್ರೆ ಶ್ರೀ| ಡಿ. ಪುಟ್ಟಸ್ವಾಮಿ, ಎಡ್ವೋಕೇಟ್.
೩೨. ಮರ್ಜಿ [ಏಕಾಂಕ ಪ್ರಹಸನ] ದಿ| ಎಂ. ಎನ್. ಕಾಮತ್.
೩೩. ದರ್ಶನದ ಕಥೆಗಳು ಶ್ರೀ| ಬಿ. ಶಂಕರ ಭಟ್ಟ ಮತ್ತು ಶ್ರೀ| ಬಿ.ಎಂ.ಶಪೂರ್.
೩೪. ಆಳುವಿನ ಹೊಳೆ ಮತ್ತು ಕೇಶವನ ರೂಪ [ಮಕ್ಕಳ ಕಥೆಗಳು] "ನವಗಿರಿನಂದ."
೩೫. ಶರಾಬಿನ ಸೀಪಾಯಿಗಳು ಶ್ರೀ| ಬಳ್ಕೂರು ಸುಬ್ರಾಯ ಅಡಿಗ.
೩೬. ಗುಮಾನಿಕವಿಯ ಉಪದೇಶ ಶತಕ ಶ್ರೀ| ಅಮ್ಮೆಂಬಳ ಅನಂತಯ್ಯ ಸಾವಡ.
೩೭. ನಿಮಗೆ ಗೊತ್ತಿದೆಯೋ? (ದ್ವಿತೀಯ ಮುದ್ರಣ) ಶ್ರೀ| ಟಿ. ಚಂದ್ರರಾಜ ಸೆಟ್ಟಿ.
೩೮. ಚತುರರ ಚಮತ್ಕಾರ ಡಾ| ಎಸ್. ಪಿ. ಭಟ್.

[14ನೇ ಪುಟಕ್ಕೆ ಮುಂದುವರಿದಿದೆ]

# ಚಾಣಕ್ಯ ಶತಕ

## (ಕನ್ನಡ ಅರ್ಥ ಸಹಿತ; ಭಾಗ ೨)

---

ಅಶೋಚ್ಯೋ ನಿರ್ಧನಃ ಪ್ರಾಜ್ಞೋಽಶೋಚ್ಯಃ ಪಂಡಿತ ಬಾಂಧವಃ ।
ಅಶೋಚ್ಯಾ ವಿಧವಾ ನಾರೀ ಪುತ್ರ ಪೌತ್ರಪ್ರತಿಷ್ಠಿತಾ ॥ ೫೬ ॥

ಪ್ರಾಜ್ಞನು ದರಿದ್ರನಾದರೆ,ಶೋಕಪಡತಕ್ಕುದಲ್ಲ. ಪಂಡಿತನು ಬಾಂಧವರೊಡನೆ ಶೋಕಪಡತಕ್ಕುದಲ್ಲ. ವಿಧವೆಯಾದ ಹೆಂಗಸು ಸತ್ಪುತ್ರ ಪೌತ್ರವತಿಯಾಗಿದ್ದರೆ ಶೋಕಪಡಬಾರದು. ॥ ೫೬ ॥

ಅವಿದ್ಯಃ ಪುರುಷಃ ಶೋಚ್ಯಃ ಶೋಚ್ಯಂ ಮೈಥುನಮಪ್ರಜಂ ।
ನಿರಾಹಾರಾಃ ಪ್ರಜಾಃ ಶೋಚ್ಯಾಃ ಶೋಚ್ಯಂರಾಜ್ಯಮರಾಜಕಂ ॥ ೫೭ ॥

ವಿದ್ಯಾಹೀನ ಪುರುಷನ ಕುರಿತು ಚಿಂತೆಪಡಬೇಕು. ಸಂತಾನ ಪಡೆಯದ ಮೈಥುನನ ಕುರಿತು ಚಿಂತೆಪಡಬೇಕು. ನಿರಾಹಾರಿಗಳಾದ ಪ್ರಜೆಗಳನ್ನು ಕುರಿತು ರಾಜನು ಶೋಕಪಡಬೇಕು. ಅರಾಜಕೀಯ ರಾಜ್ಯ ವಿಚಾರದಲ್ಲಿ ಶೋಕಪಡಬೇಕು. ॥ ೫೭ ॥

ಕುಲೀನೈಃ ಸಹ ಸಂಪರ್ಕಂ ಪಂಡಿತೈಃ ಸಹ ಮಿತ್ರತಾಂ ।
ಜ್ಞಾತಿಭಿಶ್ಚ ಸಮಂ ಮೇಲಂ ಕುರ್ವಾಣೋ ನವಿನಶ್ಯತಿ ॥ ೫೮ ॥

ಒಳ್ಳೆಯ ಕುಲದವರೊಡನೆ ಸಂಬಂಧವನ್ನು, ಪಂಡಿತರೊಡನೆ ಸ್ನೇಹವನ್ನು, ಹಾಗೆಯೇ ಜ್ಞಾತಿಗಳೊಡನೆ ಸಮಾಗಮವನ್ನು ಮಾಡುವವನು, ನಾಶಹೊಂದುವುದಿಲ್ಲ. ॥ ೫೮ ॥

ಕಷ್ಟಾ ವೃತ್ತಿಃ ಪರಾಧೀನಾ ಕಷ್ಟೋ ವಾಸೋನಿರಾಶ್ರಯಃ ।
ನಿರ್ಧನೋ ವ್ಯವಸಾಯಶ್ಚ ಸರ್ವಕಷ್ಟಾ ದರಿದ್ರತಾ ॥ ೫೯ ॥

---

**ಸೂಚನೆ:** ಈ ಪುಸ್ತಕವನ್ನು ಕೊಂಡುಕೊಳ್ಳುವಾಗ ಇದರ ಪ್ರಥಮ ಭಾಗವಾದ ಪುಸ್ತಕ ನಂಬ್ರ 148ನ್ನೂ ಜತೆಗೇ ಕೊಂಡುಕೊಳ್ಳಿರಿ.

ಪರಾಧೀನ ಜೀವನವು ಕಷ್ಟಪ್ರದವು. ಆಶ್ರಯವಿಲ್ಲದ ವಾಸ್ತವ್ಯವು ಕಷ್ಟಪ್ರದವು. ಧನಶೂನ್ಯವಾದ ವ್ಯವಸಾಯವು ಕಷ್ಟದಾಯಕವು. ದಾರಿದ್ರ್ಯವು ಎಲ್ಲ ವಿಷಯಗಳಲ್ಲಿಯೂ ಕಷ್ಟದಾಯಕವಾಗಿದೆ. ॥ ೫೯ ॥

ತಸ್ಕರಸ್ಯ ಕುತೋ ಧರ್ಮೋ? ದುರ್ಜನಸ್ಯ ಕುತಃ ಕ್ಷಮಾ? ।
ವೇಶ್ಯಾನಾಂಚ ಕುತಃ ಸ್ನೇಹಃ? ಕುತಃ ಸತ್ಯಂಚ ಕಾಮಿನಾಮ್ ॥ ೬೦ ॥

ಕಳ್ಳನಿಗೆ ಎಲ್ಲಿಯ ಧರ್ಮ? ಎಂದರೆ ಅವನಿಗೆ ಯಾವ ಧರ್ಮಭೀತಿಯೂ ಇರುವದಿಲ್ಲ. ದುಷ್ಟನಿಗೆ ಎಲ್ಲಿಯ ಕ್ಷಮೆ? ಕ್ಷಮೆಯೇ ಇಲ್ಲ. ವೇಶ್ಯಾ ಸ್ತ್ರೀಯರಿಗೆ ನಿಜವಾದ ಪ್ರೀತಿ ಎಲ್ಲಿ? ಸ್ವಲ್ಪವೂ ಪ್ರೀತಿಯಿಲ್ಲವೆಂದರ್ಥ. ಕಾಮಾಂಧರಿಗೆ ಸತ್ಯನಿಷ್ಠೆ ಎಲ್ಲಿ? ಅವರೆಂದೂ ಸತ್ಯನುಡಿಯುವುದಿಲ್ಲವೆಂದರ್ಥ ॥ ೬೦ ॥

ಪ್ರೇಷಿತಸ್ಯ ಕುತೋ ಮಾನಂ? ಕೋಪನಸ್ಯ ಕುತೋ ಸುಖಂ ।
ಸ್ತ್ರೀಣಾಂ ಕುತಃ ಸತೀತ್ವಂಚ? ಕುತೋ ಮೈತ್ರೀ ಖಲಸ್ಯಚ ॥ ೬೧ ॥

ಸೇವಕನಾದವನಿಗೆ ಮಾನವೆಲ್ಲಿ? ಕ್ರುದ್ಧಸ್ವಭಾವದವನಿಗೆ ಸುಖವೆಲ್ಲಿರುವುದು? ಎಂದಿಗೂ ಸುಖವಿಲ್ಲ. ಸ್ತ್ರೀಯರ ಸತೀತ್ವವೆಲ್ಲಿ? ದುರ್ಜನನೊಡನೆ ಸ್ನೇಹವೆಲ್ಲಿ? ಸೌಹೃದ್ಯವಿಲ್ಲೆಂದರ್ಥ ॥ ೬೧ ॥

ದುರ್ಬಲಸ್ಯ ಬಲಂ ರಾಜಾ ಬಾಲಾನಾಂ ರೋದನಂ ಬಲಂ ।
ಬಲಂ ಮೂರ್ಖಸ್ಯ ಮೌನಿತ್ವಂ ಚೌರಾಣಾಮನೃತಂ ಬಲಂ ॥ ೬೨ ॥

ಬಲಹೀನರಿಗೆ ಅರಸನೇ ಬಲವಾಗಿದ್ದಾನೆ. ಮಕ್ಕಳಿಗೆ ಅಳುವುದೇ ಬಲವು. ಮೌನವೇ ಮೂರ್ಖರಿಗೆ ಬಲವು. ಅಸತ್ಯವೇ ಚೋರರ ಬಲವು. ॥ ೬೨ ॥

ಯೋ ಧ್ರುವಾಣಿ ಪರಿತ್ಯಜ್ಯ ಅಧ್ರುವಂ ಪರಿಷೇವತೇ ।
ಧ್ರುವಾಣಿ ತಸ್ಯ ನಶ್ಯಂತಿ ಅಧ್ರುವಂ ನಷ್ಟಮೇವ ಚ ॥ ೬೩ ॥

ಯಾವನು ನಿಶ್ಚಿತವಾದುದನ್ನು ತ್ಯಜಿಸಿ ಅನಿಶ್ಚಿತವನ್ನು ಆಶ್ರಯಿಸುವನೋ ಅಂಥವನ ನಿಶ್ಚಿತವಾದ ವಸ್ತುಗಳು ನಾಶಹೊಂದುತ್ತವೆ. ಅನಿಶ್ಚಿತವಾದುದು (ಭವಿಷ್ಯವೆಂದರ್ಥ) ಅಂತೂ ನಷ್ಟವೇ. (ಅನಿಶ್ಚಿತವಾದುದನ್ನು

ಆಶ್ರಯಿಸುವುದರಿಂದ ಭವಿಷ್ಯತ್ ಪ್ರತ್ಯಾಶೆಯೂ ನಾಶಿಸುವುದೆಂಬ ಭಾವ). ॥ ೬೩ ॥

ಶುಷ್ಕಂ ಮಾಂಸಂ ಸ್ತ್ರೀಯೋ ವೃದ್ಧಾ ಬಾಲಾರ್ಕಸ್ತರುಣಂ ದಧಿ ।
ಪ್ರಭಾತೇ ಮೈಥುನಂ ನಿದ್ರಾ ಸದ್ಯಃ ಪ್ರಾಣ ಹರಾಣಿ ಷಟ್ ॥ ೬೪ ॥

ಒಣಗಿದ ಮಾಂಸ ತಿನ್ನುವುದು, ಮುದುಕಿಯರೊಡನೆ ಅನುರಾಗ, ಕನ್ಯಾರಾಶಿಸ್ಥ ಸೂರ್ಯ ಕಿರಣ ಸೇವನ, ನವ ಮೊಸರು, ಪ್ರಾತಃಕಾಲದ ಮೈಥುನ,-ಮತ್ತು ನಿದ್ರೆ-ಈ ಆರು ಮನುಷ್ಯನ ಆಯುಷ್ಯವನ್ನು ನಾಶ ಮಾಡುತ್ತವೆ. ॥ ೬೪ ॥

ಸದ್ಯೋ ಮಾಂಸಂ ನವಾನ್ನಂಚ ಬಾಲಾಸ್ತ್ರೀ ಕ್ಷೀರಭೋಜನಂ ।
ಘೃತಂಮುಷ್ಣೋದಕಂಚೈವ ಸದ್ಯಃ ಪ್ರಾಣಕರಾಣಿ ಷಟ್ ॥ ೬೫ ॥

ನವ ಮಾಂಸ, ನವ ಆಹಾರ ಭಕ್ಷಣ, ಯುವತಿ, ಕ್ಷೀರಪಾನ, ಘೃತ ಪಾನ, ಬಿಸಿನೀರು—ಈ ಆರು ಪ್ರಾಣಪೋಷಕಗಳಾಗಿವೆ. ॥ ೬೫ ॥

ಸಿಂಹಾದೇಕಂ ಬಕಾದೇಕಂ ಷಟ್ ಶುನಸ್ತ್ರೀಣಿ ಗರ್ದಭಾತ್ ।
ವಾಯುಸಾಚ್ಚ ಚತುಃ ಶಿಕ್ಷೇತ್ ಚತ್ವಾರಿ ಕುಕ್ಕುಟಾದಪಿ ॥ ೬೬ ॥

ಸಿಂಹದಿಂದ ಒಂದು ಗುಣವನ್ನು, ಬಕದಿಂದ ಒಂದನ್ನು, ನಾಯಿಯಿಂದ ಆರನ್ನು, ಕತ್ತೆಯಿಂದ ಮೂರನ್ನು, ಕಾಗೆಯಿಂದ ನಾಲ್ಕನ್ನು ಮತ್ತು ಕೋಳಿಯಿಂದ ಆರು ಹೀಗೆ ಗುಣಗಳನ್ನು ಕಲಿಯತಕ್ಕದ್ದು. ॥ ೬೬ ॥

ಪ್ರಭೂತಮಲ್ಪಕಾರ್ಯಂ ವಾ ಯೋ ನರಃ ಕರ್ತುಮಿಚ್ಛತಿ ।
ಸಮ್ಯಕ್ ಯತ್ನೇನ ತತ್ ಕುರ್ಯಾತ್ ಸಿಂಹಾದೇಕಂ ಪ್ರಕೀರ್ತಿತವತ್ ॥ ೬೭ ॥

ಯಾವ ಮನುಷ್ಯನು ಮಹತ್ಕಾರ್ಯವನ್ನು ಅಥವಾ ಅಲ್ಪಕಾರ್ಯವನ್ನಾದರೂ ಮಾಡಲಿಚ್ಛಿಸುತ್ತಾನೋ ಅದನ್ನು ಚೆನ್ನಾಗಿ ಪ್ರಯತ್ನಪಟ್ಟು ಮಾಡತಕ್ಕದ್ದು. ಈ ಒಂದು ಗುಣವನ್ನು ಸಿಂಹದಿಂದ ಕಲಿಯತಕ್ಕದ್ದು;

ಸಿಂಹವು ಹೇಗೆ ಸ್ವಲ್ಪ ಕಾರ್ಯವನ್ನಾದರೂ ಸರಿಯಾಗಿ ಸಾಧಿಸಿಮಾಡುವುದೋ ಹಾಗೆಯೇ ಎಲ್ಲರೂ ಕಾರ್ಯವನ್ನಾರಂಭಿಸಿ ಸಾಧಿಸಬೇಕೆಂದರ್ಥ. ‖ ೧೭ ‖

ಸರ್ವೇಂದ್ರಿಯಾಣಿ ಸಂಯಮ್ಯ ಬಕವತ್ ಪತಿತೋ ಜನಃ ।
ಕಾಲದೇಶೋಪಪನ್ನಾನಿ ಸರ್ವಕಾರ್ಯಾಣಿ ಸಾಧಯೇತ್ ‖ ೧೮ ‖

ಮನುಷ್ಯನು ಎಲ್ಲಾ ಇಂದ್ರಿಯಗಳನ್ನು ನಿಗ್ರಹಿಸಿಟ್ಟು ಬಕನಂತೆ ತನ್ನ ಕರ್ತವ್ಯಗಳನ್ನು ಪಾಲಿಸಬೇಕು. ಆಯಾ ದೇಶ ಕಾಲಗಳಲ್ಲಿ ಸುಲಭವಾದ ಎಲ್ಲ ಕಾರ್ಯಗಳನ್ನು ಸಾಧಿಸತಕ್ಕದ್ದು. ಇದೇ ಬಕದಿಂದ ಕಲಿಯತಕ್ಕ ಗುಣ. ಬಕಪಕ್ಷಿಯು ಹೇಗೆ ಯಥಾಸಮಯ ಯಥಾ ಸ್ಥಾನದಲ್ಲಿ ಬಿದ್ದುಕೊಂಡು ಮತ್ಸ್ಯಾದಿಗಳನ್ನು ಅನಾಯಾಸವಾಗಿ ಹಿಡಿದು ತಿನ್ನುವುದೋ ಹಾಗೆಯೇ ಮಾನವನು ಕಾಲದೇಶಗಳನ್ನು ವಿಚಾರಿಸಿ ಕೆಲಸಗಳನ್ನು ಸಾಧಿಸಿದರೆ ಚರಿತಾರ್ಥವನ್ನು ಪಡೆಯುತ್ತಾನೆಂಬುದು ತಾತ್ಪರ್ಯ. ‖ ೧೮ ‖

ಬಹ್ವಾಶೀ ಸ್ವಲ್ಪ ಸಂತುಷ್ಟಃ ಸುನಿದ್ರ ಶೀಘ್ರಚೇತನಃ ।
ಪ್ರಭುಭಕ್ತಶ್ಚ ಶೂರಶ್ಚ ಜ್ಞಾತವ್ಯಾಃ ಷಟ್ ಶುನೋಗುಣಾಃ ‖ ೧೯ ‖

ತನ್ನ ಯಜಮಾನನ ಅನೇಕ ಆಶೆಗಳನ್ನು ಪೂರೈಸುವುದು, ಸ್ವಲ್ಪದಿಂದಲೇ ಸಂತುಷ್ಟನಾಗಿರುವುದು, ಸುಖವಾಗಿ ನಿದ್ರಿಸುವುದು, ಆದರೆ ಪಕ್ಕನೆ ಎಚ್ಚತ್ತು ತಿಳಿಯುವುದು, ಸ್ವಾಮಿಭಕ್ತನಾಗಿರುವುದು, ಶೂರನಾಗಿರುವುದು, ಈ ಆರು ಗುಣಗಳು ನಾಯಿಯಲ್ಲಿಯೂ ಕೋಳಿಯಲ್ಲಿಯೂ ಇವೆ. ಇವುಗಳ ದೃಷ್ಟಾಂತದಿಂದ ಈ ಗುಣಗಳನ್ನು ಕಲಿಯತಕ್ಕದ್ದು, ಎಂದು ತಾತ್ಪರ್ಯ. ‖ ೧೯ ‖

ಅವಿಶ್ರಾಮಂ ವಹೇದ್ಭಾರಂ ಶೀತೋಷ್ಣಂ ಚ ನ ನಿಂದತಿ ।
ಸಸಂತೋಷಸ್ತಥಾ ನಿತ್ಯಂ ತ್ರೀಣಿ ಶಿಕ್ಷೇತ್ ಗರ್ದಭಾತ್ ‖ ೨೦ ‖

ವಿಶ್ರಾಮವಿಲ್ಲದೆ ಭಾರವನ್ನು ಹೊರುವ, ಶೀತೋಷ್ಣ (ಎಂದರೆ ಚಳಿ-ಸೆಕೆಗಳನ್ನು) ಪರಿಗಣಿಸದಿರುವ ಮತ್ತು ಯಾವಾಗಲೂ ಸಂತುಷ್ಟವಾಗಿರುವ– ಈ ಮೂರು ಗುಣಗಳನ್ನು ಕತ್ತೆಯ ದೃಷ್ಟಾಂತದಿಂದ ಕಲಿಯತಕ್ಕದ್ದು.

ತಾತ್ಪರ್ಯ: ಈ ದೃಷ್ಟಾಂತದಿಂದ ಅವಿಶ್ರಾಮವಾಗಿ ದುಡಿಯುವುದೂ, ಶೀತ ಗ್ರೀಷ್ಮಾಜ್ಞಾನವೂ, ಸತತ ಸಂತೋಷಶಾಲಿಗೇ ಲಭಿಸುವುವು. ॥ ೭೦ ॥

ಗೂಢಮೈಥುನ ಧರ್ಮಂ ಚ ಕಾಲೇಕಾಲೇ ಚ ಸಂಗ್ರಹಂ ।
ಅಪ್ರಮಾದಮನಾಲಸ್ಯಂ ಚತುಃ ಶಿಕ್ಷೇತ ವಾಯಸಾತ್ ॥ ೭೧ ॥

ಗೂಢವಾದ ರತಿಧರ್ಮಜೀವನ, ತಕ್ಕ ಸಮಯದಲ್ಲಿ ಸಂಗ್ರಹಿಸುವ ಮತ್ತು ಆಲಸ್ಯವಿಲ್ಲದಿರುವ ಈ ನಾಲ್ಕು ಗುಣಗಳನ್ನು ಕಾಗೆಯಿಂದ ಕಲಿಯತಕ್ಕದ್ದು. ಕಾಗೆಯಂತೆ ರತಿಧರ್ಮವನ್ನು ರಹಸ್ಯವಾಗಿ, ಕಾಲಕಾಲಕ್ಕೆ ಧನಸಂಚಯವನ್ನೂ, ಸಾವಧಾನವನ್ನೂ, ಆಲಸ್ಯತ್ಯಾಗವನ್ನೂ ಮಾಡುವುದು ಕರ್ತವ್ಯವೆಂಬ ತಾತ್ಪರ್ಯ. ॥ ೭೧ ॥

ಯುದ್ಧಂ ಚ ಪ್ರಾತರುತ್ಥಾನಂ ಭೋಜನಂ ಸಹಬಂಧುಭಿಃ ।
ಸ್ತ್ರಿಯಮಾಪದ್ಗತಾಂ ರಕ್ಷೇಚ್ಚತುಃ ಶಿಕ್ಷೇತ್ ಕುಕ್ಕುರಾತ್ ॥ ೭೨ ॥

ಯುದ್ಧಮಾಡುವ, ಬೆಳಿಗ್ಗೆ ಏಳುವ, ಬಂಧುಗಳೊಡನೆ ಭೋಜನ ಮತ್ತು ಆಪತ್ತಿಗೆ ತುತ್ತಾದ ಸ್ತ್ರೀಯರ ರಕ್ಷಣೆ ಈ ನಾಲ್ಕನ್ನು ಕೋಳಿಯಿಂದ ಕಲಿಯತಕ್ಕದ್ದು. ಕೋಳಿಯು ಹೇಗೆ ಯುದ್ಧ, ಪ್ರಾತರುತ್ಥಾನ, ಬಂಧುಸಹಭೋಜನ, ಆಪನ್ನ ಸ್ತ್ರೀರಕ್ಷಣೆಗಳನ್ನು ಮಾಡುವುದೋ ಹಾಗೆಯೇ ಎಲ್ಲ ಮನುಷ್ಯನೂ ಆಯಾ ಕೆಲಸಗಳನ್ನು ಮಾಡತಕ್ಕದ್ದೆಂಬ ತಾತ್ಪರ್ಯವು. ॥ ೭೨ ॥

ಕೋತಿಭಾರಃ ಸಮರ್ಥಾನಾಂ? ಕಿಂ ದೂರಂ ವ್ಯವಸಾಯಿನಾಂ? !
ಕೋ ವಿದೇಶಃ ಸವಿದ್ಯಾನಾಂ? ಕಃ ಪರಃ ಪ್ರಿಯವಾದಿನಾಂ? ॥ ೭೩ ॥

ಶಕ್ತರಿಗೆ ಯಾವುದು ಹೆಚ್ಚಿನ ಭಾರವಾಗಿದೆ? ಯಾವುದೂ ಭಾರವಾಗಿಲ್ಲವೆಂದರ್ಥ. ವ್ಯಾಪಾರಿಗಳಿಗೆ ದೂರ ಯಾವುದು? ಯಾವ ದೇಶವೊಡನೆ ಯಾದರೂ ವ್ಯಾಪಾರವು ದೂರವಿಲ್ಲೆಂದರ್ಥ. ವಿದ್ವಾಂಸರಿಗೆ ವಿದೇಶವಾವುದು? ಸರ್ವತ್ರವೂ ಅವರು ಪೂಜ್ಯರಾಗಿರುವರು. ಪ್ರಿಯವಾದಿಗಳಿಗೆ ಶತ್ರು ಯಾರು? ಯಾರೂ ಇಲ್ಲವೆಂದರ್ಥ. ॥ ೭೩ ॥

ಆಪದಾಂ ಕಥಿತಃ ಪಂಥಾ ಇಂದ್ರಿಯಾಣಾಮ ಸಂಯಮಃ ।
ತಜ್ಜಯಂ ಸಂಪದಾಂ ಮಾರ್ಗೋ ಯೇನೇಷ್ಟಂ ತೇನ ಗಮ್ಯತಾಂ ॥ ೭೪ ॥

ಇಂದ್ರಿಯಗಳ ಸಂಯಮನ (ನಿಗ್ರಹ) ಮಾಡದಿರುವಿಕೆ ಆಪತ್ತಿಗೆ ಮಾರ್ಗವೆಂದು ಹೇಳಿಯದೆ. ಇಂದ್ರಿಯಜಯವು ಸಂಪತ್ತಿನ ಮಾರ್ಗವು. ॥ ೭೪ ॥

ನ ಚ ವಿದ್ಯಾಸಮೋ ಬಂಧುರ್ನ ಚ ವ್ಯಾಧಿಸಮೋ ರಿಪುಃ ।
ನ ಚಾಪತ್ಯಸಮೋ ಸ್ನೇಹೋ ನ ಚ ದೈವಾತ್ ಪರಂ ಬಲಂ ॥ ೭೫ ॥

ವಿದ್ಯೆಗೆ ಸಮಾನವಾದ ಬಂಧು ಬೇರೆ ಇಲ್ಲವೇ ಇಲ್ಲ. ರೋಗಕ್ಕೆ ಸಮಾನವಾದ ಶತ್ರುವಿಲ್ಲ. ಮಕ್ಕಳಲ್ಲಿರುವಂಥ ಸ್ನೇಹಕ್ಕೆ ಸಮಾನವಾದ ಸ್ನೇಹವಿಲ್ಲ, ದೇವರಿಗಿಂತ ಶ್ರೇಷ್ಠವಾದ ಬಲವಿನ್ನೊಂದಿಲ್ಲ. ॥ ೭೫ ॥

ಸಮುದ್ರಾವರಣಾ ಭೂಮಿಃ ಪ್ರಾಕಾರಾವರಣಂ ಗೃಹಂ ।
ನರೇಂದ್ರಾವರಣಾ ದೇಶಾಶ್ಚರಿತ್ರಾವರಣಾಃ ಸ್ತ್ರಿಯಃ ॥ ೭೬ ॥

ಭೂಮಿಗೆ ಸಮುದ್ರ ಆವರಣವಾಗಿದೆ. ಮನೆಗೆ ಪ್ರಾಕಾರವೇ ಆವರಣ. ದೇಶಗಳಿಗೆ ರಾಜನೇ ಆವರಣ—ಎಂದರೆ ದೇಶಗಳು ರಾಜರಕ್ಷಿತವಾಗಿವೆ ಎಂದರ್ಥ. ಸ್ತ್ರೀಯರಿಗೆ ಚರಿತ್ರವೇ ಆವರಣವು. ಯಾವ ಸ್ತ್ರೀಯರಿಗೆ ಚಾರಿತ್ರ್ಯವೇ ಆವರಣವಾಗಿದೆಯೋ ಅಂಥವರು ಚಾರಿತ್ರ್ಯ ರಕ್ಷಿತರೆಂಬರ್ಥ. ॥ ೭೬ ॥

ಘೃತಕುಂಭಸಮಾ ನಾರೀ ತಪ್ತಾಂಗಾರ ಸಮಃ ಪುಮಾನ್ ।
ತಸ್ಮಾದ್ ಘೃತಂ ಚ ವಹ್ನಿಂ ಚ ನೈಕತ್ರ ಸ್ಥಾಪಯೇದ್ ಬುಧಃ ॥ ೭೭ ॥

ಸ್ತ್ರೀಯು ತುಪ್ಪದ ಕೊಡದಂತೆ, ಎಂದರೆ ಅತಿ ಕೋಮಲ ಸ್ವಭಾವದವಳೆಂದರ್ಥ. ಗಂಡಸು ಸುಡುವ ಕೆಂಡದಂತೆ; ಆದುದರಿಂದ ಬುದ್ಧಿವಂತನು ಒಂದು ಸ್ಥಾನದಲ್ಲೇ ತುಪ್ಪವನ್ನೂ ಬೆಂಕಿಯನ್ನೂ ಇಡಬಾರದು. ॥ ೭೭ ॥

ಆಹಾರೋ ದ್ವಿಗುಣಃ ಸ್ತ್ರೀಣಾಂ ಬುದ್ಧಿಸ್ತಾಸಾಂ ಚತುರ್ಗುಣಾ |
ಷಡ್ಗುಣೋ ವ್ಯವಸಾಯಶ್ಚ ಕಾಮಶ್ಚಾಷ್ಟಗುಣಃ ಸ್ಮೃತಃ || ೭೮ ||

ಸ್ತ್ರೀಯರಿಗೆ ಆಹಾರವು ಇಮ್ಮಡಿಯೂ, ಮತ್ತು ಬುದ್ಧಿಯು ನಾಲ್ಕು ಪಾಲೂ, ಉದ್ಯೋಗವು ಆರು ಪಾಲೂ ಮತ್ತು ಕಾಮವು ಎಂಟು ಪಾಲೂ ಎಂದು ಹೇಳಲ್ಪಟ್ಟಿದೆ. || ೭೮ ||

ಜೀರ್ಣಮನ್ನಂ ಪ್ರಶಂಸೀಯಾತ್ ಭಾರ್ಯಾಂ ಚ ಗತಯೌವನಾಂ |
ರಣಾತ್ ಪ್ರತ್ಯಾಗತಂ ಶೂರಂ ಶಸ್ಯಂ ಚ ಗೃಹಮಾಗತಂ || ೭೯ ||

ಹಳೆ ಅಕ್ಕಿ ಇತ್ಯಾದಿ ಆಹಾರಗಳನ್ನೂ, (ನಿರ್ದೋಷವಾಗಿ) ವಯಸ್ಸಾದ ಹೆಂಡತಿಯನ್ನೂ, ಸಂಗ್ರಾಮದಿಂದ ಜಯಶೀಲನಾಗಿ ಮನೆಗೆ ಹಿಂತಿರುಗುವವನನ್ನೂ ಹೊಗಳಬೇಕು. || ೭೯ ||

ಅಸಂತುಷ್ಟಾ ದ್ವಿಜಾ ನಷ್ಟಾಃ ಸಂತುಷ್ಟಾ ಇವ ಪಾರ್ಥಿವಾಃ |
ಸಲಜ್ಜಾ ಗಣಿಕಾ ನಷ್ಟಾ ನಿರ್ಲಜ್ಜಾಶ್ಚ ಕುಲಸ್ತ್ರಿಯಃ || ೮೦ ||

ಅಸಂತುಷ್ಟರಾದ ಬ್ರಾಹ್ಮಣರು, ಸಂತುಷ್ಟರಾದ ಅರಸರಂತೆಯೇ ನಾಶಹೊಂದುತ್ತಾರೆ. ವೇಶ್ಯಾಸ್ತ್ರೀಯರು ಲಜ್ಜೆಯಿಂದ ವಿಫಲರಾಗುತ್ತಾರೆ. ಕುಲಸ್ತ್ರೀಯರು ನಿರ್ಲಜ್ಜೆಯಿಂದ ನಾಶರಾಗುತ್ತಾರೆ. || ೮೦ ||

ಅವಂಶಪತಿತೋ ರಾಜಾ ಮೂರ್ಖಪುತ್ರಶ್ಚ ಪಂಡಿತಃ ||
ಅಧನೇನ ಧನಂ ಪ್ರಾಪ್ಯ ತೃಣವನ್ಮನ್ಯತೇ ಜಗತ್ || ೮೧ ||

ದುಷ್ಕುಲದಲ್ಲಿ ಜನ್ಮವೆತ್ತಿದ ಅರಸು, ಮೂರ್ಖನ ಪಂಡಿತನಾಗಿರುವ ಪುತ್ರನು, ಧನವನ್ನು ಹೊಂದಿದ ದರಿದ್ರನು ಜಗತ್ತನ್ನು ಹುಲ್ಲಿನಂತೆ ಭಾವಿಸುತ್ತಾರೆ. || ೮೧ ||

ಬ್ರಹ್ಮಹಾಪಿ ನರಪೂಜ್ಯೋ ಯಸ್ಯಾಸ್ತಿ ವಿಪುಲಂ ಧನಂ |
ಶಶಿನಸ್ತುಲ್ಯವಂಶೋಽಪಿ ನಿರ್ಧನಃ ಪರಿಭೂಯತೇ || ೮೨ ||

ಹೇರಳವಾದ ಸಂಪತ್ತಿರುವ ಮನುಷ್ಯನು, ಬ್ರಾಹ್ಮಣಘಾತಿಯಾದರೂ ಪೂಜ್ಯನು. (ಎಲ್ಲರಿಂದಲೂ ಆದರಿಸಲ್ಪಡುತ್ತಾನೆಂಬ ಭಾವ). ಚಂದ್ರ

ಸಮಾನಕುಲದವನಾದರೂ (ಸಮುಜ್ವಲ ಕುಲೋತ್ಪನ್ನನಾದರೂ) ನಿರ್ಧನ ನಾದರೆ ತಿರಸ್ಕರಿಸಲ್ಪಡುತ್ತಾನೆ. ॥ ೮೨ ॥

ಪುಸ್ತಕಸ್ಥಾತು ಯಾ ವಿದ್ಯಾ ಪರಹಸ್ತಗತಂ ಧನಂ ।
ಕಾರ್ಯಕಾಲೇ ಸಮುತ್ಪನ್ನೇ ನ ಸಾವಿದ್ಯಾ ನ ತದ್ಧನಂ ॥ ೮೩ ॥

ಗ್ರಂಥಸ್ತವಾದ ವಿದ್ಯೆ, ಅನ್ಯರ ಕೈಯಲ್ಲಿ ಕೊಟ್ಟ ಧನ ಅಗತ್ಯವಿದ್ದಾಗ ಅಂಥ ವಿದ್ಯೆ ಮತ್ತು ಧನ ಇವು ಪ್ರಯೋಜನಕ್ಕೆ ಬರುವುದೇ ಇಲ್ಲ. ॥ ೮೩ ॥

ಪಾದಪಾನಾಂ ಭಯಂ ವಾತಾತ್ ಪದ್ಮಾನಾಂ ಶಿಶಿರಾದ್ಭಯಂ ।
ಪರ್ವತಾನಾಂ ಭಯಂ ವಜ್ರಾತ್ ಸಾಧೂನಾಂ ದುರ್ಜನಾದ್ ಭಯಂ ॥೮೪॥

ಮರಗಳಿಗೆ ಗಾಳಿಯ ಭಯ, ಕಮಲಗಳಿಗೆ ಶಿಶಿರಋತುವಿನ ಭಯ, ಪರ್ವತಗಳಿಗೆ ಸಿಡಿಲಿನ ಭಯ, ಸಾಧುಗಳಿಗೆ ದುರ್ಜನರಿಂದ ಭಯವು॥೮೪॥

ಪ್ರಾಜ್ಞೇ ನಿಯೋಜ್ಯಮಾನೇ ತು ಸಂತಿ ರಾಜ್ಞಸ್ತ್ರಯೋ ಗುಣಾಃ ।
ಯಶಃ ಸ್ವರ್ಗನಿವಾಸಶ್ಚ ವಿಪುಲಶ್ಚ ಧನಾಗಮಃ ॥ ೮೫ ॥

ವಿದ್ವಾಂಸನನ್ನು ರಾಜ್ಯಕಾರ್ಯಗಳಲ್ಲಿ ನಿಯೋಜಿಸಿದರೆ ಅರಸನಿಗೆ ಯಶಸ್ಸು (ಕೀರ್ತಿ), ಸ್ವರ್ಗನಿವಾಸ, ಅತ್ಯಂತ ಧನಾಗಮ, ಈ ಮೂರು ಲಭಿಸುತ್ತವೆ. ॥ ೮೫ ॥

ಮೂರ್ಖೇ ನಿಯೋಜ್ಯಮಾನೇ ತು ತ್ರಯೋ ದೋಷಾಃ ಮಹೀಪತೇಃ ।
ಅಯಶಶ್ಚಾರ್ಥನಾಶಶ್ಚ ನರಕೇ ಗಮನಂ ತಥಾ ॥ ೮೬ ॥

ಆದರೆ, ಮೂರ್ಖನನ್ನು ನಿಯೋಜಿಸಿದರೆ ಅರಸನಿಗೆ ಅಪಕೀರ್ತಿಯು, ಧನನಾಶವು, ನರಕಾಗಮನವು, — ಈ ಮೂರು ಪ್ರಾಪ್ತವಾಗುತ್ತವೆ. ॥ ೮೬ ॥

ಬಹುಭಿರ್ಮೂರ್ಖಸಂಘಾತೈರನ್ಯೋನ್ಯ ಪಶುವೃತ್ತಿಭಿಃ ।
ಪ್ರಚ್ಛಾದ್ಯಂತೇ ಗುಣಾಃ ಸರ್ವೇ ಮೇಘೈರಿವ ದಿವಾಕರಃ ॥ ೮೭ ॥

ಮೋಡಗಳಿಂದ ಮುಚ್ಚಲ್ಪಟ್ಟ ಸೂರ್ಯನಂತೆ ಪಶುಗಳಂತೆ ವರ್ತಿಸುವ

ಬಹುಜನ ಮೂರ್ಖರ ಸಮೂಹಗಳಿಂದ, ಗುಣವಂತರ ಎಲ್ಲ ಗುಣಗಳು ಮುಚ್ಚಿಹೋಗುವುವು. ॥ ೮೭ ॥

ಯಸ್ಯ ಕ್ಷೇತ್ರಂ ನದೀತೀರೇ ಭಾರ್ಯಾಪಿ ಪರಪ್ರಿಯಾ ।
ಪುತ್ರಸ್ಯ ವಿನಯೋ ನಾಸ್ತಿ ಮೃತ್ಯುರೇವ ನ ಸಂಶಯಃ ॥ ೮೮ ॥

ನದೀತೀರದಲ್ಲಿರುವ ಭೂಮಿಯು, ಅನ್ಯರಲ್ಲಿ ಅನುರಕ್ತಳಾಗಿರುವ ಹೆಂಡತಿ, ವಿನಯವಿಲ್ಲದ ಮಗ— ಇವರು ಮೂರು ಬಗೆಯವರು ಮೃತ್ಯುವೇ ಎಂಬುದರಲ್ಲಿ ಸಂದೇಹವಿಲ್ಲ. ॥ ೮೮ ॥

ಅಸಂಭಾವ್ಯಂ ನ ವಕ್ತವ್ಯಂ ಪ್ರತ್ಯಕ್ಷಮಪಿ ದೃಶ್ಯತೇ ।
ಶಿಲಾ ತರತಿ ಪಾನೀಯಂ ಗೀತಂ ಗಾಯತಿ ವಾನರಃ ॥ ೮೯ ॥

ಶಿಲೆಯಿಂದ ನೀರು ಹರಿದುಬರುವುದಾದರೂ, ಮಂಗಗಳು ಗೀತೆಯನ್ನು ಹಾಡುವುದಾದರೂ ಪ್ರತ್ಯಕ್ಷ ನೋಡಿದರೂ ಇಂಥ ಅಸಂಭವನೀಯ ವಿಚಾರಗಳನ್ನು ವಿದ್ವಾಂಸನು ಹೇಳಕೂಡದು. ॥ ೮೯ ॥

ಸುಭಿಕ್ಷಂ ಕೃಷಕೇ ನಿತ್ಯಂ ನಿತ್ಯಂ ಸುಖಮರೋಗಿಣಿ ।
ಭಾರ್ಯಾ ಭರ್ತುಃ ಪ್ರಿಯಾ ಯಸ್ಯ ತಸ್ಯ ನಿತ್ಯೋತ್ಸವಂ ಗೃಹಮ್ ॥೯೦॥

ಕೃಷಿಕನಿಗೆ ಯಾವಾಗಲೂ ಸುಭಿಕ್ಷವು, ಆರೋಗ್ಯವಂತನಿಗೆ ಯಾವಾಗಲೂ ಸುಖವಿರುತ್ತದೆ. ಯಾರ ಹೆಂಡತಿಯು ತನ್ನ ಪತಿಯನ್ನೇ ಪ್ರೀತಿಸುತ್ತಿರುವಳೊ ಅಂಥ ಗೃಹಸ್ಥನ ಮನೆಯಲ್ಲಿ ಶಾಶ್ವತ ಸುಖವು ನೆಲೆಸುತ್ತದೆ. ॥ ೯೦ ॥

ಹೇಲಾಸ್ಯಾತ್ ಕಾರ್ಯನಾಶಾಯ ಬುದ್ಧಿನಾಶಾಯ ನಿರ್ಧನಂ ।
ಯಾಚನಾ ಮಾನನಾಶಾಯ ಕುಲನಾಶಾಯ ಭೋಜನಂ ॥ ೯೧ ॥

ಆಲಸ್ಯವು ಕಾರ್ಯವನ್ನು ನಾಶಮಾಡುತ್ತದೆ. ಧನಾಭಾವವು ಬುದ್ಧಿನಾಶಮಾಡುತ್ತದೆ. ಭಿಕ್ಷೆಬೇಡುವುದು ಮಾನನಾಶಮಾಡುತ್ತದೆ. ಧರ್ಮಾಧರ್ಮ ವಿಚಾರವಿಲ್ಲದೆ ಸಿಕ್ಕಿದಲ್ಲಿ ಭೋಜನಮಾಡುವುದರಿಂದ ಕುಲನಾಶವಾಗುತ್ತದೆ. ॥ ೯೧ ॥

ಸೇವಿತವ್ಯೋ ಮಹಾವೃಕ್ಷಂ ಫಲಚ್ಛಾಯಾ ಸಮನ್ವಿತಃ ।
ಯದಿ ದೈವಾತ್ ಫಲಂ ನಾಸ್ತಿ ಛಾಯಾ ಕೇನ ನಿವಾರ್ಯತೇ? ॥ ೯೨ ॥

ಹಣ್ಣು ಮತ್ತು ನೆರಳು ಕೊಡುವ ದೊಡ್ಡ ಮರವನ್ನು ಆಶ್ರಯಿಸ ಬೇಕು. ದೈವವಶಾತ್ ಫಲವಾಗದಿದ್ದರೂ, ನೆರಳನ್ನಾದರೂ ಅದು ಕೊಟ್ಟು ಆಯಾಸವನ್ನು ನಿವಾರಿಸುವುದಿಲ್ಲವೆ? ॥ ೯೨ ॥

ಪ್ರಥಮೇ ನಾರ್ಜಿತಾ ವಿದ್ಯಾ ದ್ವಿತೀಯೇ ನಾರ್ಜಿತಂ ಧನಂ ।
ತೃತೀಯೇ ನಾರ್ಜಿತಂ ಪುಣ್ಯಂ ಚತುರ್ಥೇ ಕಿಂಕರಿಷ್ಯತಿ? ॥ ೯೩ ॥

ಆರಂಭದಲ್ಲಿ ಎಂದರೆ ಶೈಶವಾವಸ್ಥೆಯಲ್ಲಿ ವಿದ್ಯೆಯನ್ನು ಗಳಿಸದಿದ್ದರೆ, ಎರಡನೆಯ ಎಂದರೆ ಯೌವನಾವಸ್ಥೆಯಲ್ಲಿ ಧನಗಳಿಸದಿದ್ದರೆ, ಮೂರನೆಯ ಎಂದರೆ ಪ್ರೌಢತ್ವದಲ್ಲಿ ಪುಣ್ಯಗಳಿಸದಿದ್ದರೆ, ನಾಲ್ಕನೆಯ ಎಂದರೆ ವಾರ್ಧಕ್ಯ ದಲ್ಲಿ (ಮುಪ್ಪಿನಲ್ಲಿ) ಮಾನವನು ಏನುಮಾಡಬಲ್ಲನು? ॥ ೯೩ ॥

ನದೀ ಕುಲೇಚ ಯೇ ವೃಕ್ಷಾಃ ಪರಹಸ್ತಗತಂ ಧನಂ ।
ಕಾರ್ಯಂ ಸ್ತ್ರೀಗೋಚರಂ ಯತ್ ಸ್ಯಾತ್ ಸರ್ವಂ ತದ್ವಿಫಲಂ ಭವೇತ್ ॥
॥ ೯೪ ॥

ನದೀ ತೀರದಲ್ಲಿರುವ ಮರಗಳು, ಬೇರೆಯವರ ಕೈಸೇರಿದ ಧನವು, ಸ್ತ್ರೀಯರಿಗೆ ತಿಳಿದ ಕಾರ್ಯವಿಚಾರವು, ಇವೆಲ್ಲವೂ ನಿಷ್ಫಲವಾಗುವುವು. ॥ ೯೪ ॥

ಕುದೇಶಮಾಸಾದ್ಯ ಕುತೋಽರ್ಥ ಸಂಚಯಃ?
ಕುಪುತ್ರಮಾಸಾದ್ಯ ಕುತೋ ಜಲಾಂಜಲಿಃ?
ಕುಗೇಹಿನೀಂ ಪ್ರಾಪ್ಯ ಗೃಹೇ ಕುತಃ ಸುಖಂ?
ಕುಶಿಷ್ಯಮಧ್ಯಾಪಯತಃ ಕುತೋ ಯಶಃ ॥ ೯೫ ॥

ಕೆಟ್ಟ ದೇಶಕ್ಕೆ ಹೋದರೂ, ಧನಸಂಗ್ರಹವೆಲ್ಲಿಂದ ಸಾಧ್ಯ? ಸಾಧ್ಯವೇ ಇಲ್ಲವೆಂದರ್ಥ. ಕೆಟ್ಟ ಮಗನನ್ನು ಹೊಂದಿದರೂ ತರ್ಪಣ ಜಲಲಾಭ ವೆಲ್ಲಿಂದ ಸಾಧ್ಯ? ಆಗುವುದೇ ಇಲ್ಲ. ದುಷ್ಟ ಗೃಹಿಣಿಯನ್ನು ಹೊಂದಿದವನ

ಮನೆಯಲ್ಲಿ ಸುಖವೆಲ್ಲಿಂದ? ಸುಖವೇ ಇಲ್ಲ. ದುಷ್ಟ ಶಿಷ್ಯನಿಗೆ ಪಾಠ ಹೇಳಿದರೆ ಯಶಸ್ಸೆಲ್ಲಿಂದ? ಸಿಗದು. ॥ ೯೫ ॥

ಕೂಪೋದಕಂ ವಟಚ್ಛಾಯಾ ಶ್ಯಾಮಾಸ್ತ್ರೀ ಚೇಷ್ಟಕಾಲಯಂ ।
ಶೀತಕಾಲೇ ಭವೇದುಷ್ಣಂ ಗ್ರೀಷ್ಮಕಾಲೇ ಚ ಶೀತಲಂ ॥ ೯೬ ॥

ಬಾವಿಯ ತಿಳಿನೀರು, ಆಲದ ಮರದ ನೆರಳು, ಕೃಷ್ಣವರ್ಣದ ಸ್ತ್ರೀ ಮತ್ತು ಇಷ್ಟವಿರುವ ಮನೆ ಇವು ಚಳಿಗಾಲದಲ್ಲಿ ಬಿಸಿಯಾಗಿಯೂ ಸೆಕೆಗಾಲದಲ್ಲಿ ತಂಪಾಗಿಯೂ ಇರುತ್ತವೆ. ॥ ೯೬ ॥

ವಿಷಂ ಚಙ್ಕ್ರಮಣಂ ರಾತ್ರೌ ವಿಷಂ ರಾಜ್ಞೋಽನುಕೂಲ ತಾ ।
ವಿಷಂ ಸ್ತ್ರೀಯೋಽಪ್ಯನ್ಯ ಹೃದೋ ವಿಷಂ ವ್ಯಾಧಿರವೀಕ್ಷಿತಃ ॥ ೯೭ ॥

ರಾತ್ರಿಯಲ್ಲಿ ಅತಿಶಯವಾಗಿ ತಿರುಗಾಡುವಿಕೆಯು ವಿಷದಂತೆ ಅನಿಷ್ಟ ಕಾರಕವು. ಅರಸನು ಅನುಕೂಲನಾಗಿರುವುದು ವಿಷವು. (ಅರಸನು ಅನುಕೂಲನಾದರೆ ಅವನ ಮಂತ್ರಿಗಳ ಕೋಪಕ್ಕೆ ಬಲಿಯಾಗಬೇಕಾದೀತು ಅಥವಾ ರಾಜನೇ ಕೋಪಿಸಿಕೊಂಡರೆ ಪ್ರಾಣಹಾನಿ ಸಂಭವವಿದೆ, ಎಂಬಿತ್ಯಾದಿ ಭಾವ.) ಅನ್ಯಾಸಕ್ತಸಾದವನು ತನ್ನ ಸ್ತ್ರೀಗೆ ವಿಷಪ್ರಾಯನು. ಲಕ್ಷ್ಯ ಮಾಡದ ರೋಗವೇ ವಿಷವು. ॥ ೯೭ ॥

ದುರಧೀತಾ ವಿಷಂ ವಿದ್ಯಾ ಅಜೀರ್ಣೇ ಭೋಜನಂ ವಿಷಂ ।
ವಿಷಂ ಗೋಷ್ಠೀ ದರಿದ್ರಸ್ಯ ವೃದ್ಧಸ್ಯ ತರುಣೀ ವಿಷಂ ॥ ೯೮ ॥

ದುಃಶಿಕ್ಷಿತ ವಿದ್ಯೆಯು ವಿಷವು. (ವಿಪರೀತ ಫಲಕಾರಿಯಾಗಬಹುದಾದುದರಿಂದೆಂಬ ಭಾವ.) ಅಜೀರ್ಣವಾದಾಗ ಭೋಜನವು ವಿಷವು (ರೋಗ ಉಂಟಾಗಬಹುದಾದುದರಿಂದೆಂಬ ಭಾವ) ದರಿದ್ರನೊಡನೆ ಸಭೆಯಲ್ಲಿರುವುದು ವಿಷವು. (ಬಂಧುವರ್ಗ ಸಂಗದಲ್ಲಿ ಯಾವಾಗಲೂ ಸಂಭಾಷಣಾದಿಗಳಿಂದ ಸುಖವಿರುತ್ತದೆ ಆದರೆ,ದರಿದ್ರನೊಡನೆ ಸಂಗವು ಅವನಿಗೆ ಅತಿಶಯವಾದ ಕಷ್ಟಗಳಿರುವುದರಿಂದ ಕಷ್ಟದಾಯಕವೇ ಆಗಬಹುದೆಂಬ ಭಾವ.) ಮುದುಕನಿಗೆ ತರುಣಿಯು ವಿಷಪ್ರಾಯಳು. ॥ ೯೮ ॥

ಪ್ರದೋಷೇ ನಿಹತಃ ಪಂಥಾಃ ಪತಿತಾ ನಿಹತಾಃ ಸ್ತ್ರಿಯಃ ।
ಅಲ್ಪಬೀಜಂ ಹತಂ ಕ್ಷೇತ್ರ ಭೃತ್ಯದೋಷಾತ್ ಹತಃ ಪ್ರಭುಃ ॥ ೯೯ ॥

ರಾತ್ರಿ ಕಾಲದಲ್ಲಿ ಮಾರ್ಗಗಳು ಇದ್ದೂ ಇಲ್ಲದಂತೆಯೇ ಆಗುತ್ತವೆ. ಹಾಗೆಯೇ ಪಾಪಿಷ್ಟರಾದ ಸ್ತ್ರೀಯರು ನಾಶಹೊಂದುವರು. ಸ್ವಲ್ಪವೆ ಬೀಜ ವನ್ನು ಬಿತ್ತಿದರೆ ಗದ್ದೆಯು ನಿಷ್ಫಲವಾಗುತ್ತದೆ. ಸೇವಕನ ದೋಷದಿಂದ ಯಜಮಾನನು ನಾಶಹೊಂದುವನು. ॥ ೯೯ ॥

ಹತಂ ಅಶ್ರೋತ್ರಿಯಂ ಶ್ರಾದ್ಧಂ ಹತೋ ಯಜ್ಞಸ್ತ್ವದಕ್ಷಿಣಃ ।
ಹತಾ ರೂಪವತೀ ವಂಧ್ಯಾ ಹತಂ ಸೈನ್ಯಮನಾಯಕಂ ॥ ೧೦೦ ॥

ವೇದಜ್ಞರಿಲ್ಲದ ಶ್ರಾದ್ಧವು ಅಪ್ರಾಶಸ್ತವು, ವಿಫಲವು. ದಕ್ಷಿಣೆಯಿಲ್ಲದ ಯಜ್ಞವು ವಿಫಲವು. ಬಂಜೆಯಾದ ರೂಪವತಿಯಾದ ಹೆಂಡತಿಯು ವಿಫಲಳು. ನಾಯಕನಿಲ್ಲದ ಸೇನೆಯು ವಿಫಲ ಹೊಂದುತ್ತದೆ. (ಶತ್ರುಗಳು ಅನಾಯಾಸವಾಗಿ ಸೋಲಿಸಬಹುದಾದುದರಿಂದೆಂಬ ಭಾವ.) ॥ ೧೦೦ ॥

ವೇದವೇದಾಂಗ ತತ್ವಜ್ಞೋ ಜಪಹೋಮಪರಾಯಣಃ ।
ಆಶೀರ್ವಾದವಚೋಯುಕ್ತ ಏಷ ರಾಜಪುರೋಹಿತಃ ॥ ೧೦೧ ॥

ನಾಲ್ಕು ವೇದಗಳ ವೇದಾಂಗಗಳ (ಎಂದರೆ, ಶಿಕ್ಷಾ, ಕಲ್ಪ, ವ್ಯಾಕರಣ, ನಿರುಕ್ತ, ಛಂದೋ ಜ್ಯೋತಿಷಗಳು) ಇವನ್ನು ತಿಳಿದವನೂ, ಜಪ ಹೋಮ ಪರಾಯಣನೂ (ಮಂತ್ರ ಜಪ ಯಾಗಾನುಷ್ಠಾನ ನಿರತನೂ), ಮಂಗಲಕರ ಮಾತುಗಳನ್ನಾಡುವವನೂ ರಾಜಪುರೋಹಿತನು. ॥ ೧೦೧ ॥

ಕುಲಶೀಲ ಗುಣೋಪೇತಃ ಸರ್ವಧರ್ಮಪರಾಯಣಃ ।
ಪ್ರವೀಣಃ ಪ್ರೇಷಣಾಧ್ಯಕ್ಷೋ ಧರ್ಮಾಧ್ಯಕ್ಷೋ ವಿಧೀಯತೇ ॥ ೧೦೨ ॥

ಕುಲೀನನೂ, ಚರಿತ್ರವುಳ್ಳವನೂ, ವಿದ್ಯಾದಿಗುಣಯುಕ್ತನೂ ನಾನಾ ಧರ್ಮಕಾರ್ಯನಿರತನೂ ವಿಚಕ್ಷಣನೂ ಭೃತ್ಯಕಾರ್ಯಗಳಲ್ಲಿ ಆದೇಶಗಳನ್ನು ಪಾಲಿಸುವವನೂ, ಧರ್ಮಕಾರ್ಯಗಳಲ್ಲಿ ಅವಧಾಯಕನಾಗಿ (ಅರಸನಿಂದ) ನಿಯಮಿಸಲ್ಪಡುವವನು. ॥ ೧೦೨ ॥

ಆಯುರ್ವೇದ ಕೃತಾಭ್ಯಾಸಃ ಸರ್ವೇಷಾಂ ಪ್ರಿಯದರ್ಶನಃ ।
ಆರ್ಯಶೀಲಗುಣೋಪೇತ ಏಷ ವೈದ್ಯೋ ವಿಧೀಯತೇ ॥ ೧೦೩ ॥

ಆಯುರ್ವೇದ ಎಂದರೆ ಚಿಕಿತ್ಸಾಶಾಸ್ತ್ರದಲ್ಲಿ ಶಿಕ್ಷೆಪಡೆದು ಎಲ್ಲರಿಗೂ ಸುದರ್ಶನನಾಗಿಯೂ, ಸುಚರಿತ್ರನೂ ಗುಣಸಂಪನ್ನನೂ ಆಗಿರುವ ಮನುಷ್ಯನು ವೈದ್ಯನಾಗುತ್ತಾನೆ. ಎಂದರೆ ಇಂಥ ಲಕ್ಷ್ಯ ಇರುವವನೇ ಮಾತ್ರ ವೈದ್ಯನು. ॥ ೧೦೩ ॥

ಸಕೃದುಕ್ತ ಗೃಹೀತಾರ್ಥೋ ಲಘುಹಸ್ತೋ ಜಿತಾಕ್ಷರಃ ।
ಸರ್ವಶಾಸ್ತ್ರ ಸಮಾಲೋಕೀ ಪ್ರಕೃಷ್ಟೋ ನಾಮಲೇಖಕಃ ॥ ೧೦೪ ॥

ಒಮ್ಮೆ ಹೇಳಿದುದನ್ನು ಗ್ರಹಿಸುವವನು, ಕ್ಷಿಪ್ರಹಸ್ತನು, ಅಕ್ಷರಪಾಠವನ್ನು ಚೆನ್ನಾಗಿ ಬಲ್ಲವನು, ಎಲ್ಲಾ ಶಾಸ್ತ್ರಗಳನ್ನು ಓದಿದವನು—ಇಂಥ ಮನುಷ್ಯನು ಉತ್ಕೃಷ್ಟ ಲೇಖಕನಾಗುವನು. ॥ ೧೦೪ ॥

ಸಮಸ್ತ ನೀತಿಶಾಸ್ತ್ರಜ್ಞೋ ವಾಹನೇ ಪೂಜಿತಶ್ರಮಃ ।
ಶೌರ್ಯ ವೀರ್ಯಗುಣೋಪೇತಃ ಸೇನಾಧ್ಯಕ್ಷೋ ವಿಧೀಯತೇ ॥ ೧೦೫ ॥

ಸರ್ವ ನೀತಿಶಾಸ್ತ್ರಜ್ಞನು, ಕುದುರೆ ಇತ್ಯಾದಿ ಎಲ್ಲ ವಾಹನಗಳಲ್ಲಿ ಪ್ರಶಂಸಿತ ಪರಿಶ್ರಮವುಳ್ಳವನು (ಅಶ್ವಸವಾರಿ ಇತ್ಯಾದಿಗಳಲ್ಲಿ ಪ್ರತಿಷ್ಠೆ ಹೊಂದಿದವನು) ಬಲ, ಪರಾಕ್ರಮ, ವಿವೇಕಾದಿ ಗುಣಗಳಿಂದ ಯುಕ್ತನು—ಇಂಥ ಮನುಷ್ಯನು ಸೇನಾಪತಿಯಾಗಿ (ಅರಸನಿಂದ) ಮಾಡಲ್ಪಡುವನು. (ಇಂಥವನೇ ಪರಮೋಪಕಾರಿಯಾಗಿ ಸೇನಾಪತಿಯು,ಎಂಬ ಭಾವ).॥೧೦೫॥

ಮೇಧಾವೀ ವಾಕ್ಪಟುಃ ಪ್ರಾಜ್ಞಃ ಪರಚಿತ್ತೋಪಲಕ್ಷಕಃ ।
ಧೀರೋ ಯಥೋಕ್ತವಾದೀ ಚ ಏಷ ದೂತೋ ವಿಧೀಯತೇ ॥ ೧೦೬ ॥

ಬುದ್ಧಿಶಾಲಿಯೂ, ಒಳ್ಳೆಯ ವಕ್ತಾರನೂ, ಪಂಡಿತನೂ ಪರರ ಇಂಗಿತ ತಿಳಿದವನೂ, ಧೈರ್ಯವಂತನೂ ಯಥೋಕ್ತವಾದಿಯೂ—ಇಂಥವನೇ ದೂತನಾಗಿ (ಅರಸನಿಂದ) ವಿಧಿಸಲ್ಪಡುತ್ತಾನೆ. ॥ ೧೦೬ ॥

ಪುತ್ರಪೌತ್ರ ಗುಣೋಪೇತಃ ಶಾಸ್ತ್ರಜ್ಞೋ ಮಿಷ್ಟವಾಚಕಃ ।
ಶೂರಶ್ಚ ಕಠಿನಶ್ಚೈವ ಸೂಪಕಾರಃ ಸ ಉಚ್ಯತೇ ॥ ೧೦೭ ॥

ಮಕ್ಕಳು, ಮೊಮ್ಮಕ್ಕಳು ಮತ್ತು ದಯಾದಿ ಗುಣಗಳುಳ್ಳವನು, (ಪಾಕ) ಶಾಸ್ತ್ರ ತಿಳಿದವನು, ಮಧುರಪಾಕಕರ್ತನು, ಬಲವಂತನು, ಶಕ್ತದೇಹಿಯು,–ಇಂಥ ಅಡಿಗೆಯವನು ಹೆಸರುವಾಸಿಯಾಗುತ್ತಾನೆ.॥೧೦೭॥

ಇಂಗಿತಾಕಾರ ತತ್ವಜ್ಞೋ ಬಲವಾನ್ ಪ್ರಿಯದರ್ಶನಃ ।
ಅಪ್ರಮಾದೀ ಸದಾ ದಕ್ಷಃ ಪ್ರತೀಹಾರಃ ಸಉಚ್ಯತೇ ॥ ೧೦೮ ॥

ಆಶಯ, ಆಕೃತಿಗಳ ಭಾವ ತಿಳಿದವನು, ಬಲವಂತನು, ಪ್ರಿಯ ದರ್ಶನನು, ಯಾವಾಗಲೂ ತಪ್ಪುಮಾಡದವನು, ಮತ್ತು ಚತುರನು— ಇಂಥ ದೈವಾರಿಕನು (ದ್ವಾರಪಾಲಕನು) ಪ್ರಶಸ್ತನಾಗುತ್ತಾನೆ. ॥ ೧೦೮ ॥

ಯಸ್ಯ ನಾಸ್ತಿ ಸ್ವಯಂ ಪ್ರಜ್ಞಾ ಶಾಸ್ತ್ರಂ ತಸ್ಯ ಕರೋತಿ ಕಿಂ ।
ಲೋಚನಾಭ್ಯಾಂ ವಿಹೀನಸ್ಯ ದರ್ಪಣಃ ಕಿಂ ಕರಿಷ್ಯತಿ ॥ ೧೦೯ ॥

ಯಾರಿಗೆ ಸ್ವತಃ ಬುದ್ಧಿ ಇಲ್ಲವೋ ಅಂಥವನಿಗೆ ಶಾಸ್ತ್ರದಿಂದೇನು ಪ್ರಯೋಜನ? ಏನೂ ಪ್ರಯೋಜನವಿಲ್ಲ. ಕುರುಡನಿಗೆ ಕನ್ನಡಿಯಿಂದೇನು ಪ್ರಯೋಜನ? ಯಾವ ಪ್ರಯೋಜನವೂ ಇಲ್ಲ. ॥ ೧೦೯ ॥

ಕಿಂ ಕರಿಷ್ಯತಿ ವಕ್ತಾರಃ ಶ್ರೋತಾ ಯತ್ರ ನವಿದ್ಯತೇ ।
ನಗ್ನಕ್ಷಪಣಕೇ ದೇಶೇ ರಜಕಃ ಕಿಂ ಕರಿಷ್ಯತಿ ॥ ೧೧೦ ॥

ಎಲ್ಲಿ ಶ್ರೋತ್ರಿಯರು ಇರುವುದಿಲ್ಲವೋ ಅಲ್ಲಿ ವಕ್ತಾರನು ಏನು ಮಾಡ ಬಲ್ಲನು? ದಿಗಂಬರ ಬೌದ್ಧ ಸನ್ಯಾಸಿಗಳಿರುವ ದೇಶದಲ್ಲಿ ಅಗಸನೇನು ಮಾಡ ಬಲ್ಲನು? ಬಟ್ಟೆಬರೆಗಳಿಲ್ಲದೆ ಅಗಸನ ಜೀವನವು ಸಾಗದೆಂದರ್ಥ. ॥ ೧೧೦ ॥



| | | |
|---|---|---|
| ೪೩. | ಭಾರತದ ನಾಲ್ಕು ಕಲಶಗಳು | ಶ್ರೀ। ಟಿ. ಚಂದ್ರರಾಜ ಸೆಟ್ಟಿ. |
| ೪೪. | ವ್ಯಸನದಿಂದ ಲಾಭ ಮತ್ತು ಇತರ ಕಥೆಗಳು | ಶ್ರೀ। ಎಲ್. ಎಸ್. ನಾಯಕ. |
| ೪೫. | ಸುಭಾಷಿತ (ನೀತಿವಚನಗಳು) [ದ್ವಿ.ಮು.] | ಶ್ರೀ। ಎಂ. ಸುಬ್ರಾಯನ್, ವಿದ್ವಾನ್. |
| ೪೬. | ಗಲಜೂರ "ಸಿಪಾಯಿದಂಗೆ" | ಶ್ರೀ। ಸುಭಾಷ್ಚಂದ್ರ ಶೆಣೈ, ಬದಿಯಡ್ಕ. |
| ೪೭. | ಅಕಾಂಡತಾಂಡವ (ರೇಡಿಯೋ ನಾಟಕ) | ಶ್ರೀ। ಬಿ. ದಾಮೋದರ ಬಾಳಿಗ, ಬಿ.ಎ. |
| ೪೮. | ಸಾಹಸದ ಕಥೆಗಳು | ಶ್ರೀ। ಕುಡ್ಪಿ ವಾಸುದೇವ ಶೆಣೈ. |
| ೪೯. | ಸಂಜ್ಞಾ ಜ್ಞಾನಕೋಶ (ಪ್ರಥಮ ಭಾಗ) | ಡಾ। ಎಸ್. ಪಿ. ಭಟ್. |
| ೫೦. | ಪಂಡಿತನ ಪಿಟೀಲು | ಶ್ರೀ। ಕುಡ್ಪಿ ವಾಸುದೇವ ಶೆಣೈ. |
| ೫೧. | ಭೋಗಯಾತ್ರೆ (ಆಚಾರ್ಯ ವಿನೋಬಾಭಾವೆ) | ಶ್ರೀ। ಎಲ್. ಎಸ್. ನಾಯಕ. |
| ೫೨. | ಸಂಗ್ರಾಮಸಿಂಹ (ಐತಿಹಾಸಿಕ ಕಥನ) | ಶ್ರೀ। ಅ. ಗೌ. ಕಿನ್ನಿಗೋಳಿ ವಿದ್ವಾನ್. |
| ೫೩. | ಧರ್ಮ ಶಿಕ್ಷಾ | ಶ್ರೀ। ಕೋ. ಶ. ಕಾರಂತ, ಬಿ.ಎ.,ಬಿ.ಎಲ್., ಎಡ್ವೊಕೇಟ್. |
| ೫೪. | ಮಹಾತ್ಮ (ಪೂಜ್ಯ ಬಾಪೂಜಿ) | ಶ್ರೀ। ಎಲ್. ಎಸ್. ನಾಯಕ್. |
| ೫೫. | ಮೀರಾಬಾಯಿ (ಏಕಾಂಕ ನಾಟಕ) | ಶ್ರೀ। ಸಂ. ಜ. ರಾವ್. |
| ೫೬. | ವೀರರಮಣಿ ಕರ್ಮದೇವಿ | ಶ್ರೀ। ಕೆ. ಎಸ್. ಶರ್ಮ, ವಿದ್ವಾನ್. |
| ೫೭. | ಅರಳಿದ ನಗು | ಶ್ರೀ। ಬಳ್ಕೂರು ಸುಬ್ರಾಯ ಅಡಿಗ, ವಿದ್ವಾನ್. |
| ೫೮. | ಸಚಿತ್ರ ಜಪಾನ್ | ಶ್ರೀ। ಟಿ. ರಮೇಶ ಪೈ. |
| ೫೯. | ಚುಟ್ಟಬಿಟ್ಟದಿಟ್ಟ | ಡಾ। ಎಸ್. ಪಿ. ಭಟ್. |
| ೬೦. | ನಿರಪರಾಧಿ | ಶ್ರೀ। ಎಲ್. ಎಸ್. ನಾಯಕ್. |
| ೬೧. | ಭಕ್ತವಾಣಿ | ರಾಷ್ಟ್ರಕವಿ ಮಂಜೇಶ್ವರ ಗೋವಿಂದ ಪೈ. |
| ೬೨. | ಜಾನಪದ ಸಾಹಿತ್ಯ | ಶ್ರೀ। ಪಡಾರು ಮಹಾಬಲೇಶ್ವರ ಭಟ್. |
| ೬೩. | ಡಾಕ್ಟರ್ ಅರೋಗ್ಯಮ್ | ಶ್ರೀ। ಕೆ. ಎನ್. ಭಟ್, ಶಿರಾಡಿಪಾಲ್. |
| ೬೪. | ಲೌಕಿಕ ನ್ಯಾಯಗಳು | ಶ್ರೀ। ಕೆ. ಎಲ್. ಎನ್. ಉಪಾಧ್ಯಾಯ. |
| ೬೫. | ‡ಶಿಶುಪಾಲ ಮಾನಭಂಗ | ಶ್ರೀ। ಕೆ. ಸುಭಾಷಚಂದ್ರ ಶೆಣೈ, ಬದಿಯಡ್ಕ. |
| ೬೬. | ಜರಾಸಂಧ ವಧೆ | ಶ್ರೀ। ಎ. ವಿ. ಮಯ್ಯ, ಬಂಟ್ವಾಳ. |
| ೬೭. | ಪ್ರಧಾನಾಮಾತ್ಯ ಪಂಡಿತ ಜವಾಹರಲಾಲ ನೆಹರು | ಶ್ರೀ। ಕುಡ್ಪಿ ವಾಸುದೇವ ಶೆಣೈ. |
| ೬೮. | ಕರುಣೆ ಮತ್ತು ಇತರ ಕಥೆಗಳು | ಶ್ರೀ। ಬಳ್ಕೂರು ಸುಬ್ರಾಯ ಅಡಿಗ. |
| ೬೯. | ಶ್ರೀಕ್ಷೇತ್ರ ಉಡುಪಿ [ದ್ವಿ.ಮು.] | ಶ್ರೀ। ಕೆ. ಪ್ರಭಾಕರ ರಾವ್. |
| ೭೦. | ವಿನೋದ ವಿಹಾರ | —(ಆರಿಸಿ ತೆಗೆದ ನಗೆಹನಿಗಳು) |
| ೭೧. | ಭಾರತದ ಗತವೈಭವ | ಶ್ರೀ। ಟಿ. ಚಂದ್ರರಾಜ ಸೆಟ್ಟಿ. |
| ೭೨. | ಸತ್ಯ ಹರಿಶ್ಚಂದ್ರ (ದ್ವಿತೀಯ ಮುದ್ರಣ) | ಶ್ರೀ। ಪಿ. ವೆಂಕಟ್ರಮಣ ಭಟ್ಟ. |
| ೭೩. | ಸೂಕ್ತಿಗಳು | ಶ್ರೀ। ಕೆ. ವೆಂಕಟರಾಯಾಚಾರ್ಯ. |
| ೭೪. | ಯಕ್ಷಗಾನ ಕಲಾವಿದರು (ನಟರ ಪರಿಚಯ) | ಶ್ರೀ। ವಿಘ್ನೇಶ್ವರ ಶರ್ಮ ತದ್ದಲಸೆ. |
| ೭೫. | ದೇವರ ಸಾಮ್ರಾಜ್ಯದಲ್ಲಿ ಮತ್ತು ಇತರ ಕಥೆಗಳು | ಶ್ರೀ। ಎಸ್. ಎನ್. ನವಕಾನ. |
| ೭೬. | ಕ್ರಾಂತಿಕಂಠೀರವ ಭಗತ್ ಸಿಂಘ | ಶ್ರೀ। ಸತ್ಯಾಶ್ರಯ ಕಾಮತ್. |
| ೭೭. | ಜಾತಕಪಠನ ಮತ್ತು ಇತರ ಕಥೆಗಳು | ಶ್ರೀ। ಕುಡ್ಪಿ ವಾಸುದೇವ ಶೆಣೈ. |

೭೮. ಅಮೃತವಾಣಿ (ಲೋಕನಾಯಕರ ವಚನಗಳು) ಶ್ರೀ। ಎಮ್. ಶ್ರೀಧರ ಕಿಣಿ.
೭೯. ಮಾಯಾಮೃಗ (ಏಕಾಂಕ ಪ್ರಹಸನ) ಶ್ರೀ। ಎ. ವಿ. ಮಯ್ಯ.
೮೦. ಡಾಕ್ಟರ್ ಗಾಂಧೀಜಿ ಶ್ರೀ। ಮರಕ್ಕಿಣಿ ಶಂಕರನಾರಾಯಣ ಭಟ್.
೮೧. ಶ್ರೀಶಂಕರಾಚಾರ್ಯರ ಜೀವನಚರಿತ್ರೆ(ತೃ.ಮು.) ಡಾ। ಪಿ.ಎಸ್.ವಾಸುದೇವ ಶರ್ಮ.
೮೨. " ವಿರಚಿತ ಸ್ತೋತ್ರಗಳು " " "
೮೩. ಬೆಡಗಿನ ನಾಡು—ಕೊಡಗು: ಶ್ರೀ। ಶ್ರೀಪತಿರಾವ್ ಫಲಿಮಾರ್ಕರ್, ಬಿ.ಎ,ಬಿ.ಟಿ.
೮೪. ಆನೆಯ ಚಿಪ್ಪು ಮತ್ತು ಇತರ ಸತ್ಯಕಥೆಗಳು. ಶ್ರೀ। ಎಲ್. ಎಸ್. ನಾಯಕ್.
೮೫. ಮಂಗಳೂರಿಂದ ಮಧುರೆಗೆ ಶ್ರೀ। ಟಿ. ಚಂದ್ರರಾಜ ಸೆಟ್ಟಿ.
೮೬. ಸತೀ ವೃಂದಾ (ಏಕಾಂಕ ನಾಟಕ) ಶ್ರೀ। ಕೆ. ಸುಭಾಷ್ಚಂದ್ರ ಶೆಣೈ.
೮೭. ಗೌತಮನ ಗೃಹತ್ಯಾಗ ಮತ್ತು ಸಿದ್ಧಾರ್ಥನ ಕಾರುಣ್ಯ (ಎರಡು ಏಕಾಂಕಗಳು)
೮೮. ಗೃಹವೈದ್ಯ ಶ್ರೀ। ಬಳ್ಳೂರು ಸುಬ್ರಾಯ ಅಡಿಗ.
೮೯. ನಮ್ಮ ನಾಟಕಗಳು ಶ್ರೀ। ಎಂ. ಎಸ್. ಆಚಾರ್.
೯೦. ಜಾನಪದ ಕಥೆಗಳು ಶ್ರೀ। ಕೆ. ವೆಂಕಟರಾಯಾಚಾರ್ಯ.
೯೧. ಕೆಲವು ಉಪಯುಕ್ತ ಸಲಹೆಗಳು ಶ್ರೀ। ಬಳ್ಳೂರು ಸುಬ್ರಾಯ ಅಡಿಗ.
೯೨. ಅಭಿಜ್ಞಾನ ಶಾಕುಂತಲದಲ್ಲಿ ಲೋಕನೀತಿ ಶ್ರೀ। ಕೆ.ಎಲ್.ಎನ್. ಉಪಾಧ್ಯಾಯ.
೯೩. ಹೋಮಿಯೋಪತಿ ಚಿಕಿತ್ಸಾಸಾರ ಶ್ರೀ। ಬೋಳೂರು ಎಸ್. ರಾವ್.
೯೪. ಯಕ್ಷಗಾನ ನಾಟಕದ ಪರಂಪರೆ ಮತ್ತು ಕೃತಿಗಳು ಶ್ರೀ। ಮಂಜುನಾಥ ಭಾಗವತ.
೯೫. ಪುನರುಜ್ಜೀವನ (ಏಕಾಂಕ ನಾಟಕ) ಶ್ರೀ। ಗೋವಿಂದ ಭಟ್ಟ, ಶೇಡಿಗುಮ್ಮೆ.
೯೬. ಪ್ರಥಮ ಚಿಕಿತ್ಸೆಯ ಕೈಪಿಡಿ ಶ್ರೀ। ಬೋಳೂರು ಎಸ್. ರಾವ್.
೯೭. ಹಸ್ತರೇಖಾ ವಿಜ್ಞಾನ ಡಾ। ಕೆ. ಕೆ. ಕಲ್ಕೂರ್.
೯೮. ಸ್ವಾತಂತ್ರ್ಯ (ಏಕಾಂಕ ನಾಟಕ) ಶ್ರೀ। ಕೆ. ಎನ್. ಭಟ್, ಶಿರಾಡಿಪಾಲ್.
೯೯. ಭಾರತೀಯ ಸ್ವಾತಂತ್ರ್ಯಸಂಗ್ರಾಮ ಶ್ರೀ। ಎಮ್. ರಘುನಂದನ ರಾವ್.
೧೦೦. ಭಕ್ತ ಕುಚೇಲ (ಏಕಾಂಕ ಸಂಗೀತ ನಾಟಕ) ಶ್ರೀ। ಅಂಬಾತನಯ.
೧೦೧. ಉತ್ತರನ ಪೌರುಷ (ಯಕ್ಷಗಾನ) ಶ್ರೀ। ಪುಟ್ಟಣ್ಣ.
೧೦೨. ಕುಮಾರ (ವಿನೋದ ಕಥೆ) ಶ್ರೀ। ಕುಡ್ಪಿ ವಾಸುದೇವ ಶೆಣೈ.
೧೦೩. ಕೇರಳ ಜ್ಯೋತಿಷ (ಪ್ರಮುಖ ಯೋಗಗಳು) ವೈದ್ಯಗುರು ಎಂ. ಆರ್. ಭಟ್.
೧೦೪. ಒಗಟುಗಳ ಗೊಂಚಲು (ಒಗಟುಗಳು ಭಾಗ ೩) ಡಾ। ಎಸ್. ಪಿ. ಭಟ್.
೧೦೫. ಊರ–ಔಷಧಿಗಳು ಶ್ರೀ। ಬೋಳೂರು ಎಸ್. ರಾವ್.
೧೦೬. ಮದ್ವೆ ಅಹಾಂತರ (ಏಕಾಂಕ ಪ್ರಹಸನ) "ಅಷ್ಟಾವಕ್ರ".
೧೦೭. ಜಗತ್ತಿನ ವಿಜ್ಞಾನಿಗಳು ಶ್ರೀ। ಟಿ. ಚಂದ್ರರಾಜ ಸೆಟ್ಟಿ.
೧೦೮. ನಮ್ಮ ದೇಶ ಶ್ರೀ। ಕುಡ್ಪಿ ವಾಸುದೇವ ಶೆಣೈ.
೧೦೯. ಗ್ರಾಮ ಸ್ವಾತಂತ್ರ್ಯ ಶ್ರೀ। ಎ. ವಿ. ಮಯ್ಯ.
೧೧೦. ನಮ್ಮ ಕನ್ನಡ ನಾಡು ಶ್ರೀ। ಕುಡ್ಪಿ ವಾಸುದೇವ ಶೆಣೈ.
೧೧೧. ಭಕ್ತ ಧ್ರುವ (ಏಕಾಂಕ ನಾಟಕ) ಶ್ರೀ। ಸುಬ್ರಾಯ, ಅನಂತಪುರ.
೧೧೨. ಕರ್ನಾಟಕ ಕವಿಚರಿತ್ರೆ ಶ್ರೀ। ಬಿ. ಈಶ್ವರಯ್ಯ.

| | | |
|---|---|---|
| ೧೧೩. | ಬೇಡನ ಮಗಳು (ಏಕಾಂಕ ನಾಟಕ) | ಶ್ರೀ। ವೆಂಕಟರಾಜ ಪುಣಿಂಚತ್ತಾಯ. |
| ೧೧೪. | ಸ್ವಾಮಿ ವಿವೇಕಾನಂದ | ಶ್ರೀ। ಎಂ. ಕೃಷ್ಣರಾವ್, ಬಿ. ಎ., |
| ೧೧೫ | ನಮ್ಮ ಆಹಾರ | ಶ್ರೀ। ಕೆ ಸಿ. ವೈದ್ಯರ್. |
| ೧೧೬. | ಗಾದೆಗಳೂ ಜ್ಞಾನೋಕ್ತಿಗಳೂ | ಶ್ರೀಮತಿ ಬೇಬಿ ಸರೋಜಿನಿ. |
| ೧೧೭. | ಪುರಂದರ ದಾಸರು [ಏಕಾಂಕ ನಾಟಕ] | ಶ್ರೀ। ಪದ್ಮನಾಭ ಸೋಮಯಾಜಿ. |
| ೧೧೮. | ಮನುಷ್ಯಯಜ್ಞ | ಶ್ರೀ। ಬಿ. ಶಂಕರ ಭಟ್ಟ. |
| ೧೧೯. | ಹೆಮ್ಮಕ್ಕಳ ಹಾಡುಗಳು | ಶ್ರೀ। ಪಡಾರು ಮಹಾಬಲೇಶ್ವರ ಭಟ್. |
| ೧೨೦ | ನಮ್ಮ ಹಬ್ಬಗಳು | ಶ್ರೀ। ಶ್ಯಾಮ್, ಪುತ್ತೂರು. |
| ೧೨೧. | ವೀರಾಗ್ರಣಿ ಕರ್ಣ (ಏಕಾಂಕ ನಾಟಕ) | ಶ್ರೀ। ಅಮ್ಮೆಂಬಳ ಅನಂತಯ್ಯ ನಾವಡ. |
| ೧೨೨. | ಸೂರ್ಯನೇ ನನಗೆ ಸಾಕ್ಷಿ ಮತ್ತು ಇತರ ಕಥೆಗಳು | ಶ್ರೀ। ಎನ್.ಎಸ್.ನವಕಾನ. |
| ೧೨೩. | ನವ ಕೈಲಾಸ (ಯಕ್ಷಗಾನ) | ಶ್ರೀ। ಮಾಳಕೋಡ ನಾರಾಯಣ. |
| ೧೨೪. | ಕುಶ-ಲವ (ಏಕಾಂಕ ಪೌರಾಣಿಕ ನಾಟಕ) | ಶ್ರೀ। ಬಿ. ಈಶ್ವರಯ್ಯ |
| ೧೨೫. | ಅಮರನಾಥ ಯಾತ್ರೆ | ಶ್ರೀ। ಗುಂಡ್ಮಿ ಮಹಾಬಲ ಭಟ್ಟ. |
| ೧೨೬. | ಸಂಜ್ಞಾಪ್ರಾಧ್ಯಾಪಕ ಮತ್ತು ಇತರ ಕಥೆಗಳು | ಶ್ರೀ। ಎಂ. ಕೃಷ್ಣರಾವ್, ಬಿ. ಎ |
| ೧೨೭. | ದ್ವಾರಕಾ | ಶ್ರೀ। ಗುಂಡ್ಮಿ ಮಹಾಬಲ ಭಟ್. |
| ೧೨೮. | ಭಾರತದ ಸಂಗೀತ ಜ್ಯೋತಿಗಳು | ಶ್ರೀ। ಎಚ್. ಸುಂದರರಾಮರಾವ್. |
| ೧೨೯. | ಮಕ್ಕಳ ಪದ್ಯಗಳು | ಶ್ರೀ। ಅಮ್ಮೆಂಬಳ ಅನಂತಯ್ಯ ನಾವಡ, ವಿದ್ವಾನ್. |
| ೧೩೦. | ನಯಾ ಪೈಸೆ | |
| ೧೩೧. | ತಾಯಿಗಾಗಿ ಮತ್ತು ಇತರ ಕಥೆಗಳು | ಶ್ರೀ। ಬಿ.ಶಂಕರಭಟ್, ವಿದ್ವಾನ್. |
| ೧೩೨. | ಸಂತ ಮೀರಾಬಾಯಿಯ ಭಜನಾ ಗೀತಗಳು. | ಶ್ರೀ। ಎಚ್.ಸುಂದರರಾಮರಾವ್ |
| ೧೩೩. | ಅಕ್ಷಯಪಾತ್ರೆ | ಶ್ರೀ। ಟಿ ಚಂದ್ರರಾಜ ಸೆಟ್ಟಿ, ಸಿದ್ಧಕಟ್ಟೆ. |
| ೧೩೪. | ಉ.ಕ.ದ ಯಕ್ಷಗಾನ ಮಂಡಲಿಗಳು | ಶ್ರೀ। ಮಂಜುನಾಥ ಭಾಗವತ, ಕಡತೋಕ. |
| ೧೩೫. | ಅಕ್ಬರ-ಬೀರಬಲ ವಿನೋದ (ದ್ವಿ. ಮು.) | ಶ್ರೀ। ಮಾಧವ ಭಟ್, ಮಡಿಕೇರಿ. |
| ೧೩೬. | ವೈರಾಗ್ಯನಿಧಿ | ಶ್ರೀ। ಕೆ. ಎಸ್. ಶರ್ಮಾ, ವಿದ್ವಾನ್. |
| ೧೩೭. | ಭರತನ ಬಂಧುಪ್ರೇಮ | ಶ್ರೀ। ಅಮ್ಮೆಂಬಳ ಅನಂತಯ್ಯ ನಾವಡ. |
| ೧೩೮. | ದ್ವಾದಶ ಜ್ಯೋತಿರ್ಲಿಂಗಗಳು | ಶ್ರೀ। ಗುಂಡ್ಮಿ ಮಹಾಬಲ ಭಟ್ಟ. |
| ೧೩೯. | ಪರೀಕ್ಷೆ ಮತ್ತು ಇತರ ಕಥೆಗಳು | ಶ್ರೀ। ಎಂ. ಗೋಪಾಲ ಭಟ್. |
| ೧೪೦. | ಗಿಲ್ಟುಮಾಡುವ ವಿಧಾನಗಳು | ಶ್ರೀ। ಎಂ. ಶ್ರೀನಿವಾಸರಾವ್. |
| ೧೪೧. | ಕನ್ನಡ ಗಾದೆಗಳು | ಶ್ರೀ। ಕುರಾಡಿ ಸೀತಾರಾಮ ಅಡಿಗ. |
| ೧೪೨. | ಮಹಾತ್ಮಾ ಉದಂಕ (ಏಕಾಂಕ ನಾಟಕ) | ಮಣಿಲ "ಶಿವಶಂಕರ" |
| ೧೪೩. | ಭಕ್ತ ಪ್ರಹ್ಲಾದ (ಪೌರಾಣಿಕ ಏಕಾಂಕ ನಾಟಕ) | ಶ್ರೀ। ಎ. ವಿ. ಮಯ್ಯ. |
| ೧೪೪. | ಧುನಿರಾಣಿ ಗಂಗೆ | ಶ್ರೀ। ಕೆ. ಸುಭಾಷ್ಚಂದ್ರ ಶೆಣೈ. |
| ೧೪೫. | ಸರ್ವಜ್ಞ ವಚನಗಳು | ಶ್ರೀ। ಕುಡ್ಪಿ ವಾಸುದೇವ ಶೆಣೈ. |
| ೧೪೬. | ಅಭಿಮನ್ಯು ಅಥವಾ ಚಕ್ರವ್ಯೂಹ | ಶ್ರೀ। ಬಿ. ಈಶ್ವರಯ್ಯ, ಪೆರ್ಲ |
| ೧೪೭. | ಗಾನ ಕುಸುಮ | ಶ್ರೀ। ಕೆ.ಎಸ್. ಪದ್ಮನಾಭ ಆಚಾರ್ಯ |
| ೧೪೮. | ಚಾಣಕ್ಯ ಶತಕ—ಭಾಗ ೧ | ಡಾ। ಟಿ. ಪಿ. ಭಟ್, ಮಂಗಳೂರು |
| ೧೪೯. | ಚಾಣಕ್ಯ ಶತಕ—ಭಾಗ ೨ | |

ವಿಶೇಷ ಪ್ರಕಟಣೆ: ಮಕ್ಕಳ ಹಾಡುಗಳು (ದ್ವಿತೀಯ ಮುದ್ರಣ)

‡ ಈ ಗುರುತು ಹಾಕಿದ ಪುಸ್ತಕಗಳ ಪ್ರತಿಗಳು ಮುಗಿದಿವೆ.

**Edited, Printed & Published by K. V. Shenoy at the Prabhat Printers, Ltd., Mangalore.**